KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವೆಂಬರ್ ೩೦, ೨೦೦೬ (ಮಾರ್ಗಶಿರ ೯, ಶಕ ವರ್ಷ ೧೯೨೮) | ಸಂಚಿಕೆ ೪೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಲೋಕೋಪಯೋಗಿ ಇಲಾಖೆಯಲ್ಲಿ ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ಸ್ ಕಾರಿಡಾರ್ ರಸ್ತೆಯ ಸಮನ್ವಯ ಹಾಗೂ ಉಸ್ತುವಾರಿ ಕಾರ್ಯಕ್ಕಾಗಿ ಒಂದು ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ಸೃಜಿಸುವ ಬಗ್ಗೆ.

**ಓದಲಾಗಿದೆ:** ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ 85 ಎಸಿಎಸ್ ಅಂಡ್ ಪ್ರ.ಕಾ. 2006, ದಿ: 14.6.06.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಟಿಪ್ಪಣಿಯಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ಸ್ ಕಾರಿಡಾರ್ ಯೋಜನೆಯ ಕಾರ್ಯವು ಬಹಳ ಹೆಚ್ಚಾಗುತ್ತಿದ್ದು ಹಾಗೂ ಈ ಸಂಬಂಧ ಭೂಸ್ವಾಧೀನ, ಕಾನೂನು ಅಂಶಗಳು ಮತ್ತು ಇಂಜಿನಿಯರಿಂಗ್ ವಿಷಯಗಳ ಕುರಿತಂತ ಹೆಚ್ಚಿನ ಗಮನ ನೀಡಬೇಕಾಗಿರುವುದರಿಂದ ಕಾರ್ಯದರ್ಶಿಯ ಒಂದು ಹುದ್ದೆಯ ಜೊತೆಗೆ ಒಂದು ಉಪ ಕಾರ್ಯದರ್ಶಿ (ಕಾನೂನು) ಹಾಗೂ ಒಂದು ಕಾರ್ಯಪಾಲಕ ಇಂಜಿನಿಯರ್ ಹುದ್ದೆಗಳನ್ನು ಸೃಜಿಸಲು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 77 ಸಸಿವಿ 2006, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆ ಬಿ.ಎಂ.ಐ.ಸಿ. ಯೋಜನೆಯ ಕಾರ್ಯಚಟುವಟಿಕೆಗಳನ್ನು ಗಮನಿಸಿ ಸಮನ್ವಯಿಸಲು ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 1 | ಸರ್ಕಾರದ ಕಾರ್ಯದರ್ಶಿ (ಬಿಎಂಐಸಿಪಿ) | | 1 ಹುದ್ದೆ |
| 2 | ಉಪ ಕಾರ್ಯದರ್ಶಿ (ಕಾನೂನು) (ಸಿವಿಲ್ ಜಡ್ಜ್) (ಹಿ.ಶ್ರೇ. ವೃಂದದ ಅಧಿಕಾರಿಯನ್ನು ಕಾನೂನು ಇಲಾಖೆಯಿಂದ ತುಂಬಬಹುದು) | 12850-17550 (ಎಫ್‌ಎನ್‌ಜೆಪಿಸಿ ವೇತನ ಶ್ರೇಣಿ) | 1 ಹುದ್ದೆ |
| 3 | ಕಾರ್ಯಪಾಲಕ ಇಂಜಿನಿಯರ್ (ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ ಮೇಲೆ) | 9580-14200 | 1 ಹುದ್ದೆ |

ಈ ಮೇಲ್ಕಂಡ ಹುದ್ದೆಗಳಿಗೆ ಅವಶ್ಯವಿರುವ ಪೂರಕ ಸಿಬ್ಬಂದಿ ಹುದ್ದೆಗಳು:-

| ಕ್ರ. ಸಂ. | ಹುದ್ದೆಯ ಹೆಸರು | ಕಾರ್ಯದರ್ಶಿ ಬಿ.ಎಂ.ಐ.ಪಿ.ಸಿ. | ಉಪ ಕಾರ್ಯದರ್ಶಿ (ಕಾನೂನು) | ಕಾರ್ಯಪಾಲಕರ ಇಂಜಿನಿಯರ್ |
|---|---|---|---|---|
| 1 | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 02 | 01 | 01 |
| 2 | ಶಾಖಾಧಿಕಾರಿ : ಹಿರಿಯ ಸಹಾಯಕ | 01 | - | - |
| 3 | ಕಿರಿಯ ಸಹಾಯಕ | 01 | 01 | 01 |
| 4 | ವಾಹನ ಚಾಲಕ | 01 | - | - |
| 5 | ದಲಾಯತ್ | 02 | 01 | 01 |
| | **ಒಟ್ಟು** | **07** | **03** | **03** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1803 ವೆಚ್ಚ/5 2006, ದಿನಾಂಕ: 25.10.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1611

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿ.ಆ.ಸು.ಇಲಾಖೆ ಚುನಾವಣಾ ವಿಭಾಗದಲ್ಲಿ ವೇತನ ಶ್ರೇಣಿ ರೂ. 18400-22400ರ ಸೂಪರ್ ಟೈಂ ಸ್ಕೇಲ್‌ನ ಒಂದು ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ (ಎಕ್ಸ್-ಕೇಡರ್) ಸೃಜನೆ ಬಗ್ಗೆ.

**ಓದಲಾಗಿದೆ :** ಅಧೀನ ಕಾರ್ಯದರ್ಶಿ, ಸೇವೆಗಳು-1 ಅವರ ಅ.ಟಿ.ಸಂಖ್ಯೆ: ಡಿಪಿಎಆರ್ 147 ಎಸ್‌ಎಎಸ್ 2006, ದಿ: 27.9.06.

**ಪ್ರಸ್ತಾವನೆ :**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿ.ಆ.ಸು.ಇಲಾಖೆಯ ಚುನಾವಣಾ ವಿಭಾಗದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ರೂ.22400-525-24500ರ above supertime scale ವೇತನ ಶ್ರೇಣಿಯ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಲಂಬನೆಯಲ್ಲಿಟ್ಟು ರೂ.18400-22400ರ supertime scale ವೇತನ ಶ್ರೇಣಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಆರ್. ರಾಮಶೇಷನ್, ಐಎಎಸ್ ಅವರನ್ನು ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಯಾಗಿ ನೇಮಕ ಮಾಡಿರುವ ಹಿನ್ನೆಲೆಯಲ್ಲಿ, ಸಿಆಸು ಇಲಾಖೆಯ ಚುನಾವಣಾ ವಿಭಾಗದಲ್ಲಿ ರೂ.18400-22400ರ supertime scale ವೇತನ ಶ್ರೇಣಿಯ ಒಂದು ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಯ ಎಕ್ಸ್ ಕೇಡರ್ ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ: 18.9.2006 ರಿಂದ ಜಾರಿಗೆ ಬರುವಂತೆ ಎರಡು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಸೃಜಿಸಲು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 78 ಸಸಿವಿ 2006, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಚುನಾವಣಾ ವಿಭಾಗದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ರೂ.22400-525-24500ರ above supertime scale ವೇತನ ಶ್ರೇಣಿಯ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಲಂಬನೆಯಲ್ಲಿಟ್ಟು ರೂ.18400-22400ರ supertime scale ವೇತನ ಶ್ರೇಣಿಯ ಒಂದು ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಯ ಎಕ್ಸ್ ಕೇಡರ್ ಹೊಸ ಹುದ್ದೆಯನ್ನು ದಿನಾಂಕ: 18.9.2006 ರಿಂದ ಜಾರಿಗೆ ಬರುವಂತೆ ಎರಡು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1833/ವೆಚ್ಚ-5/2006, ದಿನಾಂಕ: 25.10.2006ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1612

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿ ಖಾಲಿ ಇರುವ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ರದ್ದುಗೊಳಿಸುವ ಕುರಿತು.

**ಓದಲಾಗಿದೆ :** ಕಡತ ಸಂಖ್ಯೆ: ಡಿಪಿಇ 207 ಪಿಆರ್‌ಎಸ್ 2006

**ಪ್ರಸ್ತಾವನೆ :**

ಮೇಲೆ ಓದಲಾದ ಕಡತದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ ಇವರು ಸದರಿ ಇಲಾಖೆಯ ಕೆಲಸದ ಒತ್ತಡಗಳನ್ನು ಪುನರ್ ಪರಿಶೀಲಿಸಿದಾಗ ಖಾಲಿ ಇರುವ ಒಂದು ಉಪ ಕಾರ್ಯದರ್ಶಿ ಹುದ್ದೆ ಹಾಗೂ ಪ್ರಸ್ತುತ ಶ್ರೀಮತಿ ಆರ್.ಎಸ್. ಸುಜಾತಾರವರು ಕಾರ್ಯನಿರ್ವಹಿಸುತ್ತಿರುವ ಜಂಟಿ ಕಾರ್ಯದರ್ಶಿಯ ಹುದ್ದೆಗಳಿಗೆ ಕೆಲಸದ ಒತ್ತಡವು ಇಲ್ಲದೆ ಇರುವುದು ಕಂಡುಬಂದಿದ್ದರಿಂದ, ಆ ಹುದ್ದೆಗಳನ್ನು ಆರ್ಥಿಕ ಮಿತವ್ಯಯ ಹಾಗೂ ಆಡಳಿತ ಹಿತದೃಷ್ಟಿಯಿಂದ ರದ್ದುಗೊಳಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸಕಾರದ ಆದೇಶ ಸಂಖ್ಯೆ: ಸಿಆಸುಇ 83 ಸಸಿವಿ 2006, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿ ಖಾಲಿ ಇರುವ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1613

## ಕಂದಾಯ ಸಚಿವಾಲಯ

**ವಿಷಯ :** ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಗಳ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 41 ಮುನೊಸೊ 2004 ದಿನಾಂಕ: 26.8.2005.

2) ಆಡಳಿತಾಧಿಕಾರಿಗಳು, ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಇವರ ಪತ್ರ ಸಂಖ್ಯೆ:ಹೆಚ್.ಆರ್.ಸಿ (ಉ)ಎಂಎಸ್‌ಸಿ.2:2006-07 ದಿನಾಂಕ:16.8.2006.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ಓದಲಾದ (2) ರಲ್ಲಿ ಆಡಳಿತಾಧಿಕಾರಿಯವರು ಸಲ್ಲಿಸಿರುವ ವರದಿಯಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ ಅಧಿಕಾರವನ್ನು ಹಸ್ತಾಂತರಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಆಡಳಿತಾಧಿಕಾರಿ ಅವಧಿಯನ್ನು ಇನ್ನು 3 ತಿಂಗಳ ಅವಧಿಗೆ ವಿಸ್ತರಿಸಲು ಕೋರಿದ್ದಾರೆ. ಓದಲಾದ (2)ರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಮುನೊಸೊ 2006, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಮುನೊಸೊ 2004, ದಿನಾಂಕ: 26.8.2005ರಲ್ಲಿ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ ಬೆಂಗಳೂರು, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ:26.8.2006 ರಿಂದ 25.11.2006 ರವರೆಗೆ ವಿಸ್ತರಿಸಿದೆ. ಈ ಅವಧಿಯೊಳಗೆ ಆಡಳಿತಾಧಿಕಾರಿಗಳು ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1614

**ಶಿವಲಿಂಗ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ :** 2006-07ನೇ ಆರ್ಥಿಕ ಸಾಲಿನ ಲೆಕ್ಕ ಶೀರ್ಷಿಕೆ 2053-00-101-0-04-200 (ನಿರ್ವಹಣೆ) ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ ಇವರಿಗೆ ವಿಶೇಷ ಅಧಿವೇಶನ ಏರ್ಪಡಿಸಲು ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಎಂಎಸ್‌ಟಿ 2006 ದಿನಾಂಕ: 19.9.2006.

2) ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ ಬೆಳಗಾವಿ ಇವರ ಅ ಸ. ಪತ್ರ ಸಂ: ಪ್ರಾಆಬೆ:ಅಧಿವೇಶನ:ವಿವ:35: 2006-07, ದಿ:6.10.2006.

3) ಆರ್ಥಿಕ ಇಲಾಖೆಯ ಆದೇಶ ಸಂ:ಆಇ 317 ಬಿಆರ್‌ಎಸ್ 2006, ದಿ:2.11.2006.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂ.(1)ರಲ್ಲಿನ ಆದೇಶದಲ್ಲಿ ಬೆಳಗಾವಿ ನಗರದಲ್ಲಿ ನಡೆಯಲಾದ ವಿಶೇಷ ಅಧಿವೇಶನಕ್ಕಾಗಿ ರೂ.300.00 ಲಕ್ಷಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಸರ್ಕಾರದ ಅನುಮತಿಯನ್ನು ನೀಡಲಾಗಿತ್ತು.

1. ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 287 ಬಿಆರ್‌ಎಸ್ 2006, ದಿ:18.9.2006 ರಲ್ಲಿ 2006-07ನೇ ಆರ್ಥಿಕ ಆಯವ್ಯಯದ ಲೆಕ್ಕ ಶೀರ್ಷಿಕೆ 2053-00-101-0-04-200 ನಿರ್ವಹಣೆ (ಯೋಜನೇತರ) ಅಡಿಯಲ್ಲಿ ಹೆಚ್ಚುವರಿ ಅನುದಾನವಾದ ರೂ.200.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.
2. ಮೇಲೆ (3)ರಲ್ಲಿ ನಮೂದಿಸಿರುವ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು 2006-07ನೇ ಆಯವ್ಯಯದ ಲೆಕ್ಕ ಶೀರ್ಷಿಕೆ ಅಡಿಯಲ್ಲಿ 2053-00-101-0-04-200 ನಿರ್ವಹಣೆ (ಯೋಜನೇತರ) ಒದಗಿಸಲಾದ ರೂ. 100.00 ಲಕ್ಷ ರೂಪಾಯಿಗಳನ್ನು ಬೆಳಗಾವಿ ನಗರದಲ್ಲಿ ನಡೆಯುತ್ತಿರುವ ವಿಶೇಷ ಅಧಿವೇಶನಕ್ಕೆ ಉಪಯೋಗಿಸಲು ಅನುಮತಿ ನೀಡಿದೆ. ಪ್ರಾದೇಶಿಕ ಆಯುಕ್ತರು, ಬೆಳಗಾವಿ ಇವರಿಗೆ ಈ ಹಣವನ್ನು ಅವಶ್ಯವಿದ್ದಾಗ ಹೆಚ್ಚುವರಿ ಅನುದಾನವನ್ನು ಪಡೆಯಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಬಹುದು. ಈ ವಿಶೇಷ ಅನುದಾನದ ವೆಚ್ಚವನ್ನು ರೂ.279.00 ಲಕ್ಷಕ್ಕೆ ಮಿತಿಗೊಳಿಸಬೇಕೆಂದು ಸೂಚಿಸಲಾಗಿದೆ.
3. ಪ್ರಾದೇಶಿಕ ಆಯುಕ್ತರು, ಬೆಳಗಾವಿ ಇವರಿಗೆ ಬೆಳಗಾವಿ ನಗರದಲ್ಲಿ ನಡೆಯುತ್ತಿರುವ ವಿಶೇಷ ಅಧಿವೇಶನಕ್ಕೆ ಬೇಕಾಗಿರುವ ಅನುದಾನವನ್ನು ಸರ್ಕಾರಿ ಖಜಾನೆಯಿಂದ ಪಡೆಯುವ ಅಧಿಕಾರವನ್ನು ನೀಡಲಾಗಿದೆ.
4. ಮುಂದುವರೆದು, ಮಂಜೂರಾದ ಹೆಚ್ಚುವರಿ ಅನುದಾನವನ್ನು ಗ್ರಾಂಟ್ ನಂ.14ರಲ್ಲಿ ಆಗುವ ಒಟ್ಟು ಉಳಿತಾಯದಲ್ಲಿ ಮರು ಹೊಂದಾಣಿಕೆ ಮೂಲಕ 2006-07ರ ಆರ್ಥಿಕ ಸಾಲಿನಲ್ಲಿ ಭರಿಸತಕ್ಕದ್ದು.

ಮೇಲೆ ಓದಲಾದ ಕ್ರಮ ಸಂ.(2)ರಲ್ಲಿನ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಅರೆ ಸರ್ಕಾರಿ ಪತ್ರದಲ್ಲಿ ಬೆಳಗಾವಿ ನಗರದಲ್ಲಿ ವಿಧಾನಮಂಡಲದ ವಿಶೇಷ ಅಧಿವೇಶನ ಜರುಗಿಸುವ ಕುರಿತು ಸರ್ಕಾದ ಆದೇಶ ದಿ:19.9.2006 ರಡಿ ಬಿಡುಗಡೆ ಮಾಡಿದ ರೂ. 3.00 ಕೋಟಿ ಅನುದಾನದ ಪೈಕಿ ಗಣಕಯಂತ್ರದಲ್ಲಿ ನಮೂದಾದ ರೂ.2.95 ಕೋಟಿ ಹಣವನ್ನು ವಿಧಾನಮಂಡಲ ಅಧಿವೇಶನದ ಕುರಿತು ವಿವಿಧ ಸಾಮಗ್ರಿ ಪೂರೈಕೆದಾರರಿಗೆ ಹಾಗೂ ಅನುಷ್ಠಾನ ಅಧಿಕಾರಿಗಳಿಗೆ ಮುಂಗಡ ಅಂತ ರೂ.290.35 ಲಕ್ಷಗಳನ್ನು ನೀಡಲಾಗಿದೆ ಎಂದು ದಿ:5.10.2006ರಯ ಜರುಗಿದ ಜಿಲ್ಲಾಧಿಕಾರಿಗಳು ಬೆಳಗಾವಿ ಹಾಗೂ ಇತರೆ ಅಧಿಕಾರಿಗಳ ಸಭೆಯಲ್ಲಿ ವಿಧಾನಮಂಡಲದ ಅಧಿವೇಶನ ಕುರಿತು ನೀಡಲಾದ ಮುಂಗಡ ಹಾಗೂ ಇನ್ನೂ ಸಂದಾಯ ಮಾಡಬೇಕಾದ ಹಣದ ಬೇಡಿಕೆ ಬಗ್ಗೆ ಚರ್ಚಿಸಲಾಗಿ, ಸಭೆಯಲ್ಲಿ ಹಾಜರಿದ್ದ ಅಧಿಕಾರಿಗಳು ಈವರೆಗೆ ಬಿಡುಗಡೆ ಮಾಡಿದ ಅನುದಾನ ವಿನಿಯೋಗ ಮಾಡಲಾಗಿದ್ದು, ಪ್ರಸ್ತುತ ಅಂತಿಮ ಬಿಲ್ಲು ಸಂದಾಯ ಮಾಡಲು ಅನುದಾನದ ಬೇಡಿಕೆಗೆ ಈ ಕೆಳಕಂಡಂತೆ ವಿವರಗಳನ್ನು ಒದಗಿಸಿದ್ದಾರೆ.

(ರೂ. ಲಕ್ಷಗಳಲ್ಲಿ)

| ಅ.ನಂ. | ವಿಷಯ (ಸಂಕ್ಷಿಪ್ತದಲ್ಲಿ) | ಇನ್ನೂ ಬೇಕಾದ ಅನುದಾನ |
|---|---|---|
| 1 | ರಸ್ತೆ ರಿಪೇರಿ ಹಾಗೂ ನಗರ ಸೌಂದರೀಕರಣ | 120.00 |
| 2 | ವಸತಿ ಗೃಹ | 10.00 |
| 3 | ವಿದ್ಯುಚ್ಛಕ್ತಿ ಬಿಲ್ಲು | 22.00 |
| 4 | ವಿಧಾನಮಂಡಲ ಸಭಾಗೃಹ ವ್ಯವಸ್ಥೆ | 44.00 |
| 5 | ಆಹಾರ, ಶಿಷ್ಟಾಚಾರ ವ್ಯವಸ್ಥೆ | 18.00 |
| 6 | ಕಾನೂನು ಸುವ್ಯವಸ್ಥೆ ಕುರಿತು ಪೊಲೀಸ್ ಇಲಾಖೆಗೆ | 8.00 |
| 7 | ವಾಹನ ಬಾಡಿಗೆ (ಕೆ.ಎಸ್.ಆರ್.ಟಿ.ಸಿ.) | 6.00 |
| 8 | ಲೇಖನ ಸಾಮಾಗ್ರಿ, ಜೆರಾಕ್ಸ್, ವಗೈರೆ | 2.00 |
| 9 | ವಿದ್ಯುತ್ ಅಲಂಕಾರ, ಫೋಟೋ, ವಿಡಿಯೋ, ಇತರೆ | 20.00 |
| | **ಒಟ್ಟು** | **250.00** |

ದಿ:25.9.2006 ರಿಂದ 29.9.2006 ವರೆಗೆ ಬೆಳಗಾವಿಯಲ್ಲಿ ವಿಧಾನಮಂಡಲದ ಅಧಿವೇಶನ ಜರುಗಿಸಲು ಮಾಡಲಾದ ವ್ಯವಸ್ಥೆಗಾಗಿ ಈಗಾಗಲೇ ಬಿಡುಗಡೆಯಾದ ಅನುದಾನವಲ್ಲದೇ ಇನ್ನೂ ರೂ.250.00 ಲಕ್ಷ ಹೆಚ್ಚುವರಿ ಅನುದಾನದ ಅವಶ್ಯವಿದ್ದು ಈ ಹೆಚ್ಚುವರಿ ಅನುದಾನವನ್ನು ಆದಷ್ಟು ತೀವ್ರವಾಗಿ ಬಿಡುಗಡೆ ಮಾಡಲು ಕೋರಿರುತ್ತಾರೆ. ಈಗಾಗಲೇ ಬಿಡುಗಡೆ ಆಗಿರುವ ಅನುದಾನಕ್ಕೆ ಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇದ ಹಾಗೂ ಸಾದಿಲ್ವಾರು ಕೈಪಿಡಿ ಅನ್ವಯ ವಿನಿಯೋಗಿಸಿ ಲೆಕ್ಕಪತ್ರ ನಿರ್ವಹಿಸಲಾಗಿದೆ. ಬಿಡುಗಡೆಯಾದ ಅನುದಾನದಲ್ಲಿ ಉಳಿತಾಯವಾದಲ್ಲಿ ಅದನ್ನು ಸರ್ಕಾರಕ್ಕೆ ಮರಳಿಭರಣ ಮಾಡಲು ಕ್ರಮ ಜರುಗಿಸಲಾಗುವುದು ಎಂದು ಸಹ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂ.(3)ರ ಆದೇಶದಲ್ಲಿ 2006-07ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2053-00-101-0-04-ಬೆಳಗಾವಿ ವಿಭಾಗ-200-ನಿರ್ವಹಣೆ (ಯೋಜನೇತರ) ಅಡಿಯಲ್ಲಿ ಹೆಚ್ಚುವರಿ ಅನುದಾನವಾದ ರೂ.250.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ನಮೂದಿಸಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಸರ್ಕಾರದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 56 ಎಂಎಸ್‌ಟಿ 2006, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೆಳಗಾವಿ ನಗರದಲ್ಲಿ ನಡೆಸಲಾದ ವಿಶೇಷ ಅಧಿವೇಶನಕ್ಕಾಗಿ ರೂ.250.00 ಲಕ್ಷಗಳ ಹೆಚ್ಚುವರಿ ಅನದಾನವನ್ನು (ರೂ. ಇನ್ನೂರು ಐವತ್ತು ಲಕ್ಷಗಳು ಮಾತ್ರ) 2006-07ನೇ ಸಾಲಿನ ಲೆಕ್ಕ ಶೀರ್ಷಿಕೆ 2053-00-101-0-04-ಬೆಳಗಾವಿ ವಿಭಾಗ-200-ನಿರ್ವಹಣೆ (ಯೋಜನೇತರ) ಅಡಿಯಲ್ಲಿ ಸರ್ಕಾರವು ಈ ಕೆಳಕಾಣಿಸಿರುವ ಬಾಬ್ತುಗಳಿಗಾಗಿ ಬಿಡುಗಡೆ ಮಾಡಿದೆ.

(ರೂ. ಲಕ್ಷಗಳಲ್ಲಿ)

| ಅ.ನಂ. | ವಿಷಯ (ಸಂಕ್ಷಿಪ್ತದಲ್ಲಿ) | ಇನ್ನೂ ಬೇಕಾದ ಅನುದಾನ |
|---|---|---|
| 1 | ರಸ್ತೆ ರಿಪೇರಿ ಹಾಗೂ ನಗರ ಸೌಂದರೀಕರಣ | 120.00 |
| 2 | ವಸತಿ ಗೃಹ | 10.00 |
| 3 | ವಿದ್ಯುಚ್ಛಕ್ತಿ ಬಿಲ್ಲು | 22.00 |
| 4 | ವಿಧಾನಮಂಡಲ ಸಭಾಗೃಹ ವ್ಯವಸ್ಥೆ | 44.00 |
| 5 | ಆಹಾರ, ಶಿಷ್ಟಾಚಾರ ವ್ಯವಸ್ಥೆ | 18.00 |
| 6 | ಕಾನೂನು ಸುವ್ಯವಸ್ಥೆ ಕುರಿತು ಪೊಲೀಸ್ ಇಲಾಖೆಗೆ | 8.00 |
| 7 | ವಾಹನ ಬಾಡಿಗೆ (ಕೆ.ಎಸ್.ಆರ್.ಟಿ.ಸಿ.) | 6.00 |
| 8 | ಲೇಖನ ಸಾಮಾಗ್ರಿ, ಜೆರಾಕ್ಸ್, ವಗೈರೆ | 2.00 |
| 9 | ವಿದ್ಯುತ್ ಅಲಂಕಾರ, ಫೋಟೋ, ವಿಡಿಯೋ, ಇತರೆ | 20.00 |
| | **ಒಟ್ಟು** | **250.00** |

ಪ್ರಾದೇಶಿಕ ಆಯುಕ್ತರು, ಬೆಳಗಾವಿ ಇವರಿಗೆ ಬೆಳಗಾವಿಯಲ್ಲಿ ನಡೆಸಲಾದ ವಿಶೇಷ ಅಧಿವೇಶನಕ್ಕೆ ಸಂಬಂಧಿಸಿದಂತೆ ಬಿಡುಗಡೆ ಮಾಡಲಾದ ಹೆಚ್ಚುವರಿ ಅನುದಾನವನ್ನು ಸರ್ಕಾರಿ ಖಜಾನೆಯಿಂದ ಪಡೆಯುವ ಅಧಿಕಾರವನ್ನು ನೀಲಾಗಿದೆ. ಈ ವಿಶೇಷ ಅನುದಾನದ ವೆಚ್ಚವನ್ನು ರೂ.250.00 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ. ಮುಂದುವರೆದು, ಮಂಜೂರಾದ ಈ ಹೆಚ್ಚುವರಿ ಅನುದಾನವನ್ನು ಗ್ರಾಂಟ್ ನಂ.14ರಲ್ಲಿ ಆಗುವ ಒಟ್ಟಾರೆ ಉಳಿತಾಯದಲ್ಲಿ ಮರು ಹೊಂದಾಣಿಕೆ ಮೂಲಕ 2006-07ನೇ ಆರ್ಥಿಕ ಸಾಲಿನಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ/990/ವೆಚ್ಚ-7/06, ದಿನಾಂಕ: 2.11.2006ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1615

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಸು.ಕೋಶ)

**ವಿಷಯ :** ಲೆಕ್ಕ ಶೀರ್ಷಿಕೆ 2029 ರಡಿಯಲ್ಲಿ 2006-07ನೇ ಸಾಲಿಗೆ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಬಿಎಸ್‌ಸಿ 2005 ದಿನಾಂಕ: 8.11.2006.

2) ಸರ್ಕಾರದ ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಎಫ್ ಡಿ 310 ವೆಚ್ಚ-7/06 ದಿ:17.5.2006.

**ಪ್ರಸ್ತಾವನೆ :**

ಉಲ್ಲೇಖ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯದ ಕಂದಾಯ ಇಲಾಖೆಯಲ್ಲಿರುವ ಮಿತ ವೇತನ ಗ್ರಾಮ ಸಹಾಯಕರ ಹುದ್ದೆಗಳನ್ನು ದಿನಾಂಕ: 1.7.2006 ರಿಂದ 31.3.2007ರವರೆಗೆ ಮುಂದುವರೆಸಿ ಆದೇಶಿಸಲಾಗಿದೆ. ಸದರಿ ಆದೇಶದಲ್ಲಿ ಗ್ರಾಮ ಸಹಾಯಕರುಗಳಿಗೆ ಮಿತ ವೇತನವನ್ನು ಬಿಡುಗಡೆ ಲೆಕ್ಕ ಶೀರ್ಷಿಕೆ 2029-00-101-1-01-015ರಡಿಯಲ್ಲಿ ರೂ.220.58 ಲಕ್ಷಗಳು ಲಭ್ಯವಿರುವುದಾಗಿ ಹೇಳಿದ್ದು, ಅದನ್ನು ರಾಜ್ಯದ ಕಂದಾಯ ಇಲಾಖೆಯಲ್ಲಿ ಮಿತ ವೇತನ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿರುವ 9659 ಗ್ರಾಮ ಸಹಾಯಕರುಗಳಿಗೆ ಒಂದು ತಿಂಗಳ ಮಿತವೇತನವನ್ನು ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ.ಕಂಇ 19 ಎಂಎಸ್‌ಟಿ 2006, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಮೇರೆಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಕಾಣಿಸಿರುವಂತೆ ರಾಜ್ಯದ ಕಂದಾಯ ಇಲಾಖೆಯಲ್ಲಿ ಮಿತ ವೇತನ (ಸ್ಟೈಫೆಂಡರಿ) ಗ್ರಾಮ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿರುವ 9659 ಗ್ರಾಮ ಸಹಾಯಕರುಗಳಿಗೆ ಒಂದು ತಿಂಗಳಿಗೆ ಮಾತ್ರ ಮಾಸಿಕ ಸಂಭಾವನೆ ತಲಾ 2000/-ರೂ. ನಂತೆ ಪಾವತಿಸಲು ಒಟ್ಟು ರೂ. 19318000ಗಳನ್ನು (ರೂಪಾಯಿ ಒಂದು ಕೋಟಿ ತೊಂಭತ್ತು ಮೂರ ಲಕ್ಷದ ಹದಿನೆಂಟು ಸಾವಿರಗಳು ಮಾತ್ರ) ಎಲ್ಲಾ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2029-00-101-1-01-015 ಪೂರಕ ವೆಚ್ಚಗಳ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ.ಎಫ್ ಡಿ 310 ವೆಚ್ಚ-7/2006 ದಿನಾಂಕ:17.5.2006ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ.ಸು.ಕೋಶ)

**Annexure to G.O.no RD 19 MST 2006 datd 8/11/2006**
**Release of funds to Gramashayaks for one month**

| ಕ್ರ. ಸಂ. | ಜಿಲ್ಲೆಯ ಹೆಸರು | ಗ್ರಾಮ ಸಹಾಯಕರ ಸಂಖ್ಯೆ ಮಾಸಿಕ ರೂ.2,000/-) | |
|---|---|---|---|
| 1 | ಬೆಂಗಳೂರು ನಗರ | 191 | 382000 |
| 2 | ಬೆಂಗಳೂರು ಗ್ರಾಮಾಂತರ | 424 | 848000 |
| 3 | ಬೆಳಗಾವಿ | 740 | 1480000 |
| 4 | ಬಳ್ಳಾರಿ | 402 | 804000 |
| 5 | ಬಿದರ್ | 350 | 700000 |
| 6 | ಬಿಜಾಪುರ | 343 | 686000 |
| 7 | ಬಾಗಲಕೋಟೆ | 347 | 694000 |
| 8 | ಚಿಕ್ಕಮಗಳೂರು | 222 | 444000 |
| 9 | ಚಿತ್ರದುರ್ಗ | 325 | 650000 |
| 10 | ಚಾಮರಾಜನಗರ | 241 | 482000 |
| 11 | ದಕ್ಷಿಣ ಕನ್ನಡ | 342 | 684000 |
| 12 | ಧಾರವಾಡ | 217 | 434000 |
| 13 | ದಾವಣಗೆರೆ | 293 | 586000 |
| 14 | ಗುಲ್ಬರ್ಗ | 650 | 1300000 |
| 15 | ಗದಗ | 194 | 388000 |
| 16 | ಹಾಸನ | 444 | 888000 |
| 17 | ಹಾವೇರಿ | 370 | 740000 |
| 18 | ಕೊಡಗು | 134 | 268000 |
| 19 | ಕೋಲಾರ | 495 | 990000 |
| 20 | ಕೊಪ್ಪಳ | 215 | 430000 |
| 21 | ಮಂಡ್ಯ | 494 | 988000 |
| 22 | ಮೈಸೂರು | 466 | 932000 |
| 23 | ರಾಯಚೂರು | 334 | 668000 |
| 24 | ಶಿವಮೊಗ್ಗ | 170 | 340000 |
| 25 | ತುಮಕೂರು | 637 | 1274000 |
| 26 | ಉತ್ತರ ಕನ್ನಡ | 400 | 800000 |
| 27 | ಉಡುಪಿ | 219 | 438000 |
| | **ಒಟ್ಟು** | **9659** | **19318000** |

**ಎಂ.ಕೆ. ನರಸಿಂಹಲು**

ಪಿ.ಆರ್. 1616

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಸು.ಕೋಶ)

## EDUCATION SECRETARIAT

**Sub :** Extension of Pension and other monitory benefits to the Teachers / Librarians and Physical Education Teachers of Universities, Aided Regional Engineering and First Grade Colleges in the State who have retired during the period from 1.1.1996 to 31.3.1998 regarding.

**Read :**
1) Government Order No. ED 100 UNE 99 dated: 15.11.99 and No. ED 188 DCE 88 dated: 15.11.99.
2) Government Order No. ED 183 DCE 99 dated: 29.07.2000
3) Government Order No. ED 100 UNE 2000 dated: 8.8.2000
4) Government Order No. FD (SPI.) 1 PET 99 dated: 15.2.99
5) High Curt Judgement dated: 06.10.2001 passed in W.P. No. 8793 of 2001 and other connected cases.
6) Write Appeal No.367 / 2002 and other connected cases on the file of Divisional Bench of the Hon'ble High Court - judgement dated: 11.3.2004.
7) Supreme Court Judgement dated: 12.5.2006 passed in C.A. No. 1389 of 2006 together with connected C.A. No. 1390-1395 and 1865 of 2006.
8) Supreme Court Contempt Case 199 of 2006.

**Preamble:**

The State Government by its orders dated: 15.11.99 read under reference (1) above has extended UGC pay scales to the Teachers, Librarians and Physical Education Directors in the Universities, Aided Regional Engineering Colleges and First Grade Aided Colleges in the State with effect from 1.1.96. In the mean while the State Government by its Order dated: 15.2.99 read above (4) has revised the pensionary benefits including family pensions benefits retrospectively from 1.4.98 to all the Government Servants and also made applicable to the U.G.C. pay scale holders. However, in Government Order dated: 29.7.2000 read above under reference (2) has introduced paragraph 27-A to the Government Order No. ED 188 DCE 88 dated: 15.11.99 which is read as follows:

(i) UGC scales as revised from 1.1.96 have been linked to the index level of 1510 points in a such as the revised pay scale structured includes the DA admissible as on 1.1.96 to the extent of 138% of basic pay. AS on 1.1.96 the pensionary benefits under the State Government has not been revised. The revised pay scales of the State Government employees came into force from 1.4.98 by merging the DA as on 1.1.96. The pensionary benefits were also simultaneously revised w.e.f. 1.4.98. Therefore, the revised pay drawn in the UGC pay scales for the period from 1.1.96 upto 31.3.98 shall not be taken as emoluments for the purpose of pensionary benefits. Accordingly.

(a) In respect of teachers drawing UGC pay scales who have retired during the period from 1.1.96 to 31.3.98 they shall be eligible for the benefit of the fixation of pay and arrears under the revised UGC scales of pay only. There shall not be any change in their pensionary benefits with reference to the revised UGC pay and the retirement benefits already sanctioned in the pre-revised UGC pay scales will not undergo any modifications. However, they shall be entitled to the benefit of fixation of revised pension / family pension as contemplated in Government Order N.FD (Spl.) 2 PET 99 dated: 15.2.99 only w.e.f. 1st April, 1998. Para 6 of Government Order No. FD (Spl.) 2 PET 99 dated: 15.2.99 stand modified to this extent.

(b) In respect of teachers drawing UGC pay scales and who have issued on or after 1.4.98, the pay drawn in the revised UGC pay scales shall be counted or the purpose of pensionary benefits and the orders revising the pensionary benefits vide Government order No. FD (Spl.) 1 PET 99 dated 15.2.99 shall be made applicable."

Similarly an amendment was also made in respect of the Regional Engineering Colleges by inserting para 31-A vide Government Order dated: 8.8.2000 read under reference (3) above. The undisputed facts issued in Government Orders dated: 29.7.2000 and 8.8.2000 were challenged before the Hon'ble High Court of Karnataka in WP. Nos read above under reference (5). The learned single judge leased to allow there Writ Petitions and set aside the Government Orders dated: 29.7.2000 and 8.8.2000. Aggrieved by the said Court Order the State Government preferred Writ Appeal Nos 367/2002 and connected appeals before the Divisional Bench of the Hon'ble High Court of Karnataka. The Divisional Bench in its common judgement dated: 11.3.2004 read above under rereference (6) was pleased to allow the writ appeal and set aside the order dated: 6.10.2001 passed by the learned single judge of the High Court of Karnataka.

Aggrieved by the order dated: 11.3.2004 the petitioners preferred S.L.P. and there after they were numbered as Civil Appeals No.1389 of 2006, 1390-1395 of 2006 and 1865 of 2006 on the file of Supreme Court of India. The Hon'ble Court after hearing both sides on merits of the cases was pleased to allow the

said Civil Apeals and delivered Judgement on 12.5.2006 set asiding the order dated: 11.3.2004 of the Divisional Bench with an observation stating that, the persons similarly situated cannot be discriminated against.

Government has taken a decision not to prefer appeal against the judgement passed on 12.5.2006 by the Supreme Court of India. The appellants in the above Civil Apeals are also urging the State by sending several representations for implemenation of the Hon'ble Supreme Court of India order dated: 12.5.2006.

In the above circumtances the Government is pleased to pass necessary orders as follows:

**Government Order No. ED 275 UPC 2004, Bagalore, Dated: 13th November 2006**

Government is pleased to order for Extension of the benefits of fixation of revised Pension / Family Pension as contemplated in Government Order No. FD (Spl.) 2 PET 99 dated 15.2.99 and other monitory benefits to the Teachers / Librarians and Physical Education Teachers of Universities, Aided Regional Engineering Colleges and Aided First Grade Colleges in the State who have retired during the period from 1.1.1996 to 31.3.1998 and the Quantum of their pensionary benefits shall be computed on the basis of 50% of the last pay drawn in terms of the rule 296 of K.C.S.R. Rules, 1958.

This order issues with the concurrence of Finance Department vide U.O. Note No. FD 845 Ser.2/06 dated: 9.11.2006.

By Order and in the name of the Governor of Karnataka,

P.R. 1617

**M.P. MANJUNATH**

Under Secretary to Government, Education Department.

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಲಕ್ಷ್ಮೀ ಕೋ-ಅಪರೇಟಿವ್ ಕ್ರೆಡಿಟ್ ಸೊಸೈಟಿ ಲಿ. ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಇದರ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ, 1/111-ಎಸ್.ಎಸ್.ಎನ್/2006-07/ದಿನಾಂಕ:25.9.2006.

**ಪ್ರಸ್ತಾವನೆ :**

ಶ್ರೀ ಲಕ್ಷ್ಮೀ ಕೋ-ಅಪರೇಟಿವ್ ಕ್ರೆಡಿಟ್ ಸೊಸೈಟಿ ಲಿ, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಈ ಸಂಘದ ಆಡಳಿತ ಮಂಡಳಿಯನ್ನು ದಿನಾಂಕ: 3.2.2005ರಂದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1) ರನ್ವಯ ರದ್ದುಪಡಿಸಿ, ಸದರಿ ಸಂಘದ ಆಡಳಿತ ಮಂಡಳಿಯ ಸ್ಥಾನದಲ್ಲಿ ಆಡಳಿತಗಾರರನ್ನು ನೇಮಿಸಿದ್ದು ಸದರಿ ಆಡಳಿತಗಾರರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸುತ್ತಾ ಅಂತಿಮವಾಗಿ ದಿನಾಂಕ:8.8.2006 ರವರೆಗೆ ವಿಸ್ತರಿಸಲಾಗಿರುತ್ತದೆಂದೂ ಸಂಘದ ಮಾಜಿ ಅಧ್ಯಕ್ಷರು ಆಡಳಿತ ಮಂಡಳಿಯ ರದ್ದತಿ ಆದೇಶವನ್ನು ಪ್ರಶ್ನಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 106 ರಡಿ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ನ್ಯಾಯಾಲಯದಲ್ಲಿ ಅಪೀಲು ಸಲ್ಲಿಸಿದ್ದು ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸದರಿ ಅಪೀಲನ್ನು ಪುರಸ್ಕರಿಸಿ ದಿನಾಂಕ: 3.2.2005ರ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾವಿ ಪ್ರಾಂತ, ಬೆಳಗಾವಿ ಇವರ ಆದೇಶವನ್ನು ರದ್ದುಪಡಿಸಿ ದಿನಾಂಕ: 4.3.2006 ರಂದು ಆದೇಶ ಹೊರಡಿಸಿದ್ದು, ಸದರಿ ಆದೇಶವನ್ನು ಪ್ರಶ್ನಿಸಿ ಸಂಘದ ವ್ಯವಸ್ಥಾಪಕ ನಿರ್ದೇಶಕರು ಶ್ರೇಷ್ಠ ನ್ಯಾಯಾಲಯದಲ್ಲಿ ಸಲ್ಲಿಸಲಾಗಿದ್ದ ರಿಟ್ ಅರ್ಜಿ ಸಂಖ್ಯೆ: 4608/2006 ರಲ್ಲಿ ದಿನಾಂಕ: 27.3.2006 ರಂದು ಶ್ರೇಷ್ಠ ನ್ಯಾಯಾಲಯವು ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ಆದೇಶಕ್ಕೆ ತಡೆಯಾಜ್ಞೆಯನ್ನು ನೀಡಿದ್ದು ಸದರಿ ರಿಟ್ ಅರ್ಜಿಯು ಶ್ರೇಷ್ಠ ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿರುವುದರಿಂದ ಈ ರಿಟ್ ಅರ್ಜಿಯ ಅಂತಿಮ ತೀರ್ಪನ್ನು ಅವಲಂಬಿಸಿ ಮುಂದಿನ ತೀರ್ಮಾನ ಕೈಗೊಳ್ಳಬೇಕಾಗಿರುತ್ತದೆಂದೂ ತಿಳಿಸುತ್ತಾ ಸದರಿ ಸಂಘದ ಆಡಳಿತಗಾರರ ಅವಧಿಯನ್ನು ದಿನಾಂಕ: 9.8.2006 ರಿಂದ ದಿ:31.3.2007ರವರೆಗೆ ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ತಮ್ಮ ಪತ್ರದಲ್ಲಿ ಕೋರಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 214 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2006**

ಮೇಲೆ ಪ್ರಸ್ತಾವೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1)ನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಶ್ರೀ ಲಕ್ಷ್ಮೀ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ. ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ;

**ಪ್ರಕರಣ 30ರ** ಉಪ ಪ್ರಕರಣ (1)ರಲ್ಲಿನ **"ಒಂದು ವರ್ಷ"** ಎಂಬ ಪದಗಳಿಗೆ ಬದಲಾಗಿ **"ಇಪ್ಪತ್ತು ತಿಂಗಳು"** ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 30(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:31.3.2007 ವರೆಗೆ ಜಾರಿಯಲ್ಲಿರತಕ್ಕದ್ದು ಈ ಅವಧಿ ಮಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣದ 30(1)ರ ಉಪಬಂಧಗಳು ಪುನಃಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1618

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆ ಸಿರಸಿ ಕಂದಾಯ ತಾಲ್ಲೂಕಿನ ಎರಡು ಹೆಚ್ಚುವರಿ ನೋಟರಿ ಹುದ್ದೆಗೆ ನೇಮಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂ.ಲಾ 209 ಎಲ್‌ಸಿಎಲ್ 05, ದಿನಾಂಕ: 24.12.05.
2) ಸರ್ಕಾರಿ ಆದೇಶ ಸಂ.ಲಾ 209 ಎಲ್‌ಸಿಎಲ್ 05, ದಿನಾಂಕ: 31.12.05.
3) ಜಿಲ್ಲಾ ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಇವರ ಪತ್ರ ಸಂಖ್ಯೆ: ADM.11/3369/2006 ದಿನಾಂಕ: 11.7.06.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 24.12.05ರ ಸರ್ಕಾರಿ ಆದೇಶದಲ್ಲಿ ಸಿರಸಿ ಕಂದಾಯ ತಾಲ್ಲೂಕಿಗೆ ಹೆಚ್ಚುವರಿಯಾಗಿ 2 ನೋಟರಿ ಹುದ್ದೆಗಳನ್ನು ಸೃಜಿಸಲಾಗಿದೆ. ಸದರಿ ಹುದ್ದೆಗಳನ್ನು ತುಂಬಲು ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಜಿಲ್ಲೆ ಇವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ 31.12.05ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ:11.7.06ರ ಪತ್ರದಲ್ಲಿ ಜಿಲ್ಲಾ ಸತ್ರ ನ್ಯಾಯಾಧೀಶರು ಉತ್ತರ ಕನ್ನಡ ಜಿಲ್ಲೆರವರು 30 ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ. ಲಾ 136 ಎಲ್‌ಸಿಎಲ್ 2006, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಈ ಕೆಳಕಂಡವರುಗಳನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಉತ್ತರ ಕನ್ನಡ ಜಿಲ್ಲೆಯ ಸಿರಸಿ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

1. ಶ್ರೀ ಗಣಪತಿ ಅನಂತ ಹೆಗಡೆ
   ವಕೀಲರು, ಕಾಗೇರಿ, ಬರೂರು ಅಂಚೆ,
   ಸಿರಸಿ, ಉತ್ತರ ಕನ್ನಡ ಜಿಲ್ಲೆ.
2. ಶ್ರೀಮತಿ ಎನ್.ಆರ್. ತ್ರಿವೇಣಿ,
   ವಕೀಲರು, ನಂ.1226 ಅನಂದ ನಿಲಯ,
   2ನೇ ಮೈನ್, 5ನೇ ಕ್ರಾಸ್, ಗಾಂಧಿನಗರ,
   ಸಿರಸಿ ಉತ್ತರ ಕನ್ನಡ ಜಿಲ್ಲೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳಿಗೆ (0070-01-501-0-06) ನಿಗದಿಪಡಿಸಲಾದ ರೂ.1000.00 (ರೂ. ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಆಡಳಿತ-2).

ಪಿ.ಆರ್. 1619

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ಕಂದಾಯ ತಾಲ್ಲೂಕಿನ ಕಡಬ ಹೋಬಳಿ ನೋಟರಿ ಹುದ್ದೆಗೆ ನೇಮಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂ.ಲಾ 117 ಎಲ್‌ಸಿಎಲ್ 04, ದಿನಾಂಕ: 06.03.2006 ಹಾಗೂ ತಿದ್ದುಪಡಿ ದಿನಾಂಕ:23.06.06.
2) ಸರ್ಕಾರಿ ಪತ್ರ ಸಂಖ್ಯೆ.ಲಾ 117 ಎಲ್‌ಸಿಎಲ್ 04, ದಿನಾಂಕ: 05.07.06.
3) ಜಿಲ್ಲಾ ಸತ್ರ ನ್ಯಾಯಾಧೀಶರು, ದಕ್ಷಿಣ ಕನ್ನಡ ಇವರ ಪತ್ರ ಸಂಖ್ಯೆ: ADMN-II/8639/2006 ದಿನಾಂಕ: 13.9.06.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 23.6.06ರ ಸರ್ಕಾರಿ ಆದೇಶದಲ್ಲಿ ಪುತ್ತೂರು ಕಂದಾಯ ತಾಲ್ಲೂಕು ಕಡಬ ಹೋಬಳಿಗೆ ಹೆಚ್ಚುವರಿಯಾಗಿ 1 ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ. ಸದರಿ ಹುದ್ದೆಯನ್ನು ತುಂಬಲು ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಸತ್ರ ನ್ಯಾಯಾಧೀಶರು, ದಕ್ಷಿಣ ಕನ್ನಡ ಜಿಲ್ಲೆ ಇವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ 5.7.2006ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ:13.9.06ರ ಪತ್ರದಲ್ಲಿ ಜಿಲ್ಲಾ ಸತ್ರ ನ್ಯಾಯಾಧೀಶರು, ದಕ್ಷಿಣ ಕನ್ನಡ ಜಿಲ್ಲೆರವರು ಒಟ್ಟು 08 ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ. ಲಾ 117 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಮನೋಹರ ಎಸ್, ವಕೀಲರು ಸಬಲೂರು ಹೌಸ್, ಕೆ.ಸಿ. ಫಾರಂ ಅಂಚೆ, ಕೊಯಿಲ ವಿಲೇಜ್, ಕಡಬ ಹೋಬಳಿ ಪುತ್ತೂರು ತಾಲ್ಲೂಕು ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ಕಂದಾಯ ತಾಲ್ಲೂಕಿನ ಕಡಬ ಹೋಬಳಿ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳಿಗೆ (0070-01-501-0-06) ನಿಗದಿಪಡಿಸಲಾದ ರೂ.1000.00 (ರೂ. ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಆಡಳಿತ-2).

ಪಿ.ಆರ್. 1620